# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1648

ಸದಸ್ಯರ ಹೆಸರು : ಶ್ರೀ ಕೆ.ಎ. ತಿಪ್ಪೇಸ್ವಾಮಿ (ನಾಮನಿರ್ದೇಶನ ಹೊಂದಿದವರು)

ಉತ್ತರಿಸುವ ದಿನಾಂಕ : 14.03.2022

ಉತ್ತರಿಸುವವರು : ಅರಣ್ಯ, ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವರು.

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿರುವ ಹುಲಿ ಯೋಜನೆಗಳ ಸಂಖ್ಯೆ ಎಷ್ಟು; ಈ ಯೋಜನೆಯನ್ನು ಯಾವ ಯಾವ ಅರಣ್ಯ ಪ್ರದೇಶಗಳಲ್ಲಿ / ಜಿಲ್ಲೆಗಳಲ್ಲಿ ಗುರುತಿಸಿ ಅನುಷ್ಠಾನಗೊಳಿಸಲಾಗುತ್ತಿದೆಯೆ; (ಅದರ ಪೂರ್ಣ ವಿವರವನ್ನು ನೀಡುವುದು) | ರಾಜ್ಯದಲ್ಲಿ ಐದು(5) ಹುಲಿ ಯೋಜನೆ / ಹುಲಿ ಸಂರಕ್ಷಿತ ಪ್ರದೇಶಗಳಿರುತ್ತವೆ. ಸದರಿ ಹುಲಿ ಯೋಜನೆಗಳನ್ನು ಈ ಕೆಳಕಂಡ ಜಿಲ್ಲೆಗಳಲ್ಲಿ ಅನುಷ್ಠಾನಗೊಳಿಸಲಾಗುತ್ತಿದೆ. |

| ಕ್ರ. ಸಂ. | ಹುಲಿಯೋಜನೆ | ಜಿಲ್ಲೆ |
|---|---|---|
| 1 | ಬಂಡೀಪುರ ಹುಲಿ ಯೋಜನೆ | ಮೈಸೂರು ಮತ್ತು ಚಾಮರಾಜನಗರ ಜಿಲ್ಲೆ |
| 2 | ರಾಜೀವ್ ಗಾಂಧಿ (ನಾಗರಹೊಳೆ) ಹುಲಿ ಯೋಜನೆ | ಕೊಡಗು ಮತ್ತು ಮೈಸೂರು ಜಿಲ್ಲೆ |
| 3 | ಭದ್ರಾ ಹುಲಿ ಯೋಜನೆ | ಚಿಕ್ಕಮಗಳೂರು ಜಿಲ್ಲೆ |
| 4 | ಕಾಳಿ ಹುಲಿ ಯೋಜನೆ | ಉತ್ತರ ಕನ್ನಡ ಜಿಲ್ಲೆ |
| 5 | ಬಿ.ಆರ್.ಟಿ. ಹುಲಿ ಯೋಜನೆ | ಚಾಮರಾಜನಗರ ಜಿಲ್ಲೆ |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಆ) | ರಾಜ್ಯದಲ್ಲಿ ಹುಲಿ ಯೋಜನೆಯ ಅನುಷ್ಠಾನಕ್ಕೆಂದು ಕೇಂದ್ರ ಸರ್ಕಾರದಿಂದ ಇದುವರೆಗೆ ದೊರೆತಿರುವ ಆರ್ಥಿಕ ನೆರವು, ಅನುದಾನ ಮತ್ತು ವಿವಿಧ ರೀತಿಯ ಬೆಂಬಲ ಎಷ್ಟು; (ಅದರ ಪೂರ್ಣ ವಿವರವನ್ನು ನೀಡುವುದು) | ರಾಜ್ಯದಲ್ಲಿ ಕೇಂದ್ರ ಪುರಸ್ಕೃತ ಹುಲಿ ಯೋಜನೆಯು 1973 ರಿಂದ ಅನುಷ್ಠಾನಗೊಳಿಸಲಾಗುತ್ತಿದೆ. ಹುಲಿ ಸಂರಕ್ಷಿತ ಯೋಜನೆಗಳ ಅನುಷ್ಠಾನಕ್ಕೆ ಕೇಂದ್ರ ಸರ್ಕಾರವು ಕೇಂದ್ರದ ಪಾಲು ಶೇ. 60% ಒದಗಿಸುತ್ತಿದ್ದು, ಇದಕ್ಕೆ ಎದುರಾಗಿ ರಾಜ್ಯ ಸರ್ಕಾರವು ರಾಜ್ಯದ ಪಾಲು ಶೇ. 40% ರಷ್ಟು ಆರ್ಥಿಕ ನೆರವು ನೀಡಲಾಗುತ್ತಿದೆ.<br><br>ಕಳೆದ ಮೂರು ವರ್ಷಗಳಲ್ಲಿ ಕೇಂದ್ರ ಸರ್ಕಾರದಿಂದ ಬಿಡುಗಡೆಯಾದ ಅನುದಾನದ ವಿವರ ಕೆಳಗಿನಂತಿದೆ. |

(ರೂ. ಲಕ್ಷಗಳಲ್ಲಿ)

| ಯೋಜನೆ | 2019-20 | 2020-21 | 2021-22 (ಫೆಬ್ರವರಿವರೆಗೆ) |
|---|---|---|---|
| ಹುಲಿ ಯೋಜನೆ | 2,318.93 | 2,427.33 | 1,966.33 |

<table>
<tr><th>ಕ್ರ. ಸಂ.</th><th>ಪ್ರಶ್ನೆ</th><th>ಉತ್ತರ</th></tr>
<tr><td>ಇ)</td><td>ರಾಜ್ಯದಲ್ಲಿ ಈ ಯೋಜನೆಯ ಅನುಷ್ಠಾನಕ್ಕೆ ರಾಜ್ಯ ಸರ್ಕಾರದ ಮೇಲೆ ಆರ್ಥಿಕ ಭಾರ ಮತ್ತು ಕೊರತೆ ಇರುವುದರಿಂದ, ಕೇಂದ್ರ ಸರ್ಕಾರದಿಂದ ಹೆಚ್ಚಿನ ಅನುದಾನವನ್ನು ಕೋರಿ ಪ್ರಸ್ತಾವನೆಯನ್ನು ಸಲ್ಲಿಸಲಾಗಿದೆಯೇ;</td><td>ರಾಜ್ಯದಲ್ಲಿ ಹುಲಿಯೋಜನೆಗಳ ಅನುಷ್ಠಾನಕ್ಕಾಗಿ ಅವಶ್ಯವಿರುವ ಅನುದಾನಕ್ಕೆ ರಾಜ್ಯ ಸರ್ಕಾರವು ಪ್ರತೀ ಆರ್ಥಿಕ ಸಾಲಿನಲ್ಲಿ ವಾರ್ಷಿಕ ಕ್ರಿಯಾ ಯೋಜನೆಯನ್ನು ತಯಾರಿಸಿ ಕೇಂದ್ರ ಸರ್ಕಾರಕ್ಕೆ ಸಲ್ಲಿಸಲಾಗುತ್ತದೆ. ಅದರನ್ವಯ ಕೇಂದ್ರ ಸರ್ಕಾರವು ವಾರ್ಷಿಕ ಕ್ರಿಯಾ ಯೋಜನೆಗಳಿಗೆ ಅನುಮೋದನೆ ನೀಡಿ ಕೇಂದ್ರದ ಪಾಲು ಶೇ. 60% ಒದಗಿಸುತ್ತದೆ. ಅದಕ್ಕೆ ಎದುರಾಗಿ ರಾಜ್ಯ ಸರ್ಕಾರವು ರಾಜ್ಯದ ಪಾಲು ಶೇ. 40% ರಷ್ಟು ಆರ್ಥಿಕ ನೆರವು ನೀಡಲಾಗುತ್ತಿದೆ.</td></tr>
<tr><td>ಈ)</td><td>ರಾಜ್ಯದಲ್ಲಿ ಕಳೆದ ಬಾರಿಯ ಹುಲಿ-ಜನಗಣತಿಯ ಪ್ರಕಾರ ಹುಲಿಗಳ ಸಂಖ್ಯೆ ಎಷ್ಟು; ಇತ್ತೀಚೆಗೆ ವನ್ಯ ಮೃಗ ಮತ್ತು ಮಾನವ ಸಂಘರ್ಷಗಳಲ್ಲಿ ಹುಲಿ ಮತ್ತು ಮಾನವ ಪ್ರಾಣ ಹಾನಿಗಳುಂಟಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಹಾಗಿದ್ದಲ್ಲಿ, ಪೂರ್ಣ ವಿವರವನ್ನು ನೀಡುವುದು;</td><td>2017-18ನೇ ಸಾಲಿನಲ್ಲಿ ರಾಷ್ಟ್ರೀಯ ಹುಲಿ ಸಂರಕ್ಷಣಾ ಪ್ರಾಧಿಕಾರ ರವರ ಅಧ್ಯಕ್ಷತೆಯಲ್ಲಿ ಕೈಗೊಂಡ ಹುಲಿ ಗಣತಿ ಕಾರ್ಯದಲ್ಲಿ ಕರ್ನಾಟಕ ರಾಜ್ಯದಲ್ಲಿ 524 ಹುಲಿಗಳು ಇರುವ ಬಗ್ಗೆ ಅಂದಾಜಿಸಲಾಗಿರುತ್ತದೆ.<br><br>ಹೌದು, ಇತ್ತೀಚಿಗೆ ವನ್ಯಮೃಗ ಮತ್ತು ಮಾನವ ಸಂಘರ್ಷಗಳಲ್ಲಿ ಹುಲಿ ಮತ್ತು ಮಾನವ ಪ್ರಾಣ ಹಾನಿಗಳು ಉಂಟಾಗಿರುವುದು ಸರ್ಕಾರದ ಗಮನಕ್ಕೆ ಬಂದಿರುತ್ತದೆ.<br><br>ಕಳೆದ 03 ವರ್ಷದಲ್ಲಿ ಮಾನವ-ಹುಲಿ ಸಂಘರ್ಷದಿಂದ ಉಂಟಾದ ಮಾನವ-ಪ್ರಾಣ ಹಾನಿ ಪ್ರಕರಣಗಳ ವಿವರ ಕೆಳಕಂಡಂತಿದೆ:<br><br>
<table>
<tr><th>ಕ್ರಸಂ</th><th>ವರ್ಷ</th><th>ವಿಭಾಗ</th><th>ಪ್ರಕರಣ</th></tr>
<tr><td>1</td><td>2019-20</td><td>ಬಂಡೀಪುರ</td><td>02</td></tr>
<tr><td rowspan="2">2</td><td rowspan="2">2020-21</td><td>ವಿರಾಜಪೇಟೆ</td><td>03</td></tr>
<tr><td>ನಾಗರಹೊಳೆ</td><td>01</td></tr>
<tr><td>3</td><td>2021-22</td><td>ನಾಗರಹೊಳೆ</td><td>01</td></tr>
</table>
<br>ಕಳೆದ 03 ವರ್ಷಗಳಲ್ಲಿ ಹುಲಿ ಮತ್ತು ಮಾನವ ಸಂಘರ್ಷದಿಂದ ಹುಲಿ ಮೃತಪಟ್ಟಿರುವ ಯಾವುದೇ ಪ್ರಕರಣ ವರದಿಯಾಗಿರುವುದಿಲ್ಲ.</td></tr>
</table>

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಉ) | ರಾಜ್ಯ ಸರ್ಕಾರವು ರಾಜ್ಯದಲ್ಲಿ ಹುಲಿ ಯೋಜನೆಗೆ ಹೊಂದಿಕೊಂಡಂತೆ ಅರಣ್ಯ ಸರಹದ್ದಿನಲ್ಲಿರುವ ಪ್ರದೇಶಗಳನ್ನು ಅರಣ್ಯೀಕರಣಗೊಳಿಸಲು ಕೇಂದ್ರ ಸರ್ಕಾರ Compensatory Afforestration Fund Act-2016ರ ವ್ಯಾಪ್ತಿಯಲ್ಲಿರುವ Compensatory Afforestration Fund Management and Planning Authority ನಿಧಿಯಡಿಯಲ್ಲಿ ಪ್ರಸ್ತಾವನೆಯನ್ನು ತಯಾರಿಸಿ ಕೇಂದ್ರ ಸರ್ಕಾರಕ್ಕೆ ಸಲ್ಲಿಸಲಾಗಿದೆಯೇ? (ಹಾಗಿದ್ದಲ್ಲಿ ವಿವರವನ್ನು ನೀಡುವುದು) | Compensatory Afforestation fund Management and Planning Authority (CAMPA) ನಿಧಿಯಡಿಯಲ್ಲಿ ವನ್ಯಜೀವಿ ಪ್ರದೇಶಗಳಲ್ಲಿ ಅರಣ್ಯೀಕರಣ ಕಾಮಗಾರಿಗಳನ್ನು ಕೈಗೊಳ್ಳಲಾಗುವುದಿಲ್ಲ. ವನ್ಯಜೀವಿ ಆವಾಸಸ್ಥಾನ ಅಭಿವೃದ್ಧಿ ಕಾಮಗಾರಿಗಳನ್ನು ಮಾತ್ರ ಕೈಗೊಳ್ಳಲಾಗುತ್ತಿದೆ. |

ಸಂಖ್ಯೆ: ಅಪಜೀ 55 ಎಫ್ ಡಬ್ಲ್ಯೂ ಎಲ್ 2022

(ಉಮೇಶ್ ವಿ. ಕತ್ತಿ)
ಅರಣ್ಯ, ಆಹಾರ, ನಾಗರಿಕ ಸರಬರಾಜು
ಮತ್ತು ಗ್ರಾಹಕರ ವ್ಯವಹಾರಗಳ ಸಚಿವರು